# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 132
ಸದಸ್ಯರ ಹೆಸರು : ಶ್ರೀ ಯು.ಬಿ.ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು)
ಉತ್ತರಿಸುವ ದಿನಾಂಕ : **16.02.2022.**
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ನಗರದ ಸುತ್ತಮುತ್ತ ನಕಲಿ ದಾಖಲೆ ಸೃಷ್ಠಿ ಮಾಡಿ ಸರ್ಕಾರಿ ಭೂಮಿ (ಗೋಮಾಳ/ಕೆರೆ/ಇತರೆ) ಯನ್ನು ಕಬಳಿಕೆ ಮಾಡಿರುವ ಸಂಬಂಧ ಶ್ರೀ ಎ.ಟಿ.ರಾಮಸ್ವಾಮಿ ನೇತೃತ್ವದ ಸಮಿತಿಯ ವರದಿಯ ಪ್ರಕಾರ ಕಬಳಿಕೆ/ ಒತ್ತುವರಿಯಾಗಿರುವ ಭೂಮಿಯ ವಿಸ್ತೀರ್ಣವೆಷ್ಟು; | ಶ್ರೀ ಎ.ಟಿ.ರಾಮಸ್ವಾಮಿ ನೇತೃತ್ವದ ಸಮಿತಿಯ ವರದಿಯಂತೆ ಬೆಂಗಳೂರು ನಗರದ ಸುತ್ತಮುತ್ತ ಒಟ್ಟು 33,877-09.11 ಎಕರೆ/ಗುಂಟೆ ಸರ್ಕಾರಿ ಭೂಮಿಯು (ಗೋಮಾಳ/ಕೆರೆ/ಇತರೆ) ಒತ್ತುವರಿಯಾಗಿರುತ್ತದೆ. |
| ಆ) | ಈವರೆಗೆ ಎಷ್ಟು ಎಕರೆ ವಿಸ್ತೀರ್ಣದ ಭೂ ಕಬಳಿಕೆಯನ್ನು ತೆರವುಗೊಳಿಸಲಾಗಿದೆ; | ಬೆಂಗಳೂರು ನಗರ ಜಿಲ್ಲೆಯಲ್ಲಿ 16,420-06.01 ಎಕರೆ/ಗುಂಟೆ ಸರ್ಕಾರಿ ಜಮೀನನ್ನು ಒತ್ತುವರಿಯಿಂದ ತೆರವುಗೊಳಿಸಲಾಗಿರುತ್ತದೆ. |
| ಇ) | ತೆರವುಗೊಳಿಸಿರುವ ಪ್ರದೇಶಗಳು ಮರು ಕಬಳಿಕೆ/ಒತ್ತುವರಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಇಂತಹವುಗಳನ್ನು ಸಂರಕ್ಷಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿಯನ್ನು ಒದಗಿಸುವುದು) | ಒತ್ತುವರಿಯಿಂದ ತೆರವುಗೊಳಿಸಿರುವ ಪ್ರದೇಶಗಳು ಮರು ಒತ್ತುವರಿಯಾಗಿರುವುದು ಕಂಡುಬಂದಿರುವುದಿಲ್ಲ. |
| ಈ) | ಬಾಕಿ ತೆರವುಗೊಳಿಸಬೇಕಾಗಿರುವ ಭೂ ಕಬಳಿಕೆ/ಒತ್ತುವರಿ ವಿಸ್ತೀರ್ಣವೆಷ್ಟು ಇದಕ್ಕೆ ನಿಗದಿಗೊಳಿಸಿರುವ ಕಾಲಮಿತಿಯಷ್ಟು; ವಿಳಂಬಗೊಳ್ಳಲು ಕಾರಣಗಳೇನು; | ಬೆಂಗಳೂರು ನಗರ ಜಿಲ್ಲೆಯಲ್ಲಿ 1,22,918 ಎಕರೆ/ಗುಂಟೆ ಸರ್ಕಾರಿ ಜಮೀನಿದ್ದು, ಇದರಲ್ಲಿ 38,894 ಎಕರೆ/ಗುಂಟೆ ಸರ್ಕಾರಿ ಜಮೀನು ಒತ್ತುವರಿ ಇದೆ.<br><br>ವಿವಿಧ ನ್ಯಾಯಾಲಯಗಳಲ್ಲಿರುವ ಪ್ರಕರಣಗಳು, ಅಕ್ರಮ ಸಕ್ರಮ ಯೋಜನೆ ಮತ್ತು ಸಾರ್ವಜನಿಕ ಉದ್ದೇಶಗಳಿಗೆ ಬಳಕೆಯಾಗಿರುವ ಒಟ್ಟು 22,199 ಎಕರೆ/ಗುಂಟೆ ಜಮೀನು ಹೊರತುಪಡಿಸಿ, ಉಳಿದಂತೆ 16,695 ಎಕರೆ/ಗುಂಟೆ ಜಮೀನನ್ನು ಒತ್ತುವರಿಯಿಂದ ತೆರವುಗೊಳಿಸಬೇಕಾಗಿರುತ್ತದೆ.<br><br>ಇದರಲ್ಲಿ 16,420 ಎಕರೆ/ಗುಂಟೆ ಸರ್ಕಾರಿ ಜಮೀನನ್ನು ಒತ್ತುವರಿಯಿಂದ |

| | | |
|---|---|---|
| | | ತೆರವುಗೊಳಿಸಲಾಗಿದೆ. ಉಳಿದಂತೆ 275 ಎಕರೆ/ಗುಂಟೆ ಜಮೀನನ್ನು ಒತ್ತುವರಿ ತೆರವುಗೊಳಿಸಲು ಬಾಕಿ ಇದೆ.<br><br>ಸರ್ಕಾರಿ ಜಮೀನಿನ ಒತ್ತುವರಿಯನ್ನು ತೆರವುಗೊಳಿಸಲು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ, ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಕಾರ್ಯ ಪಡೆಗಳನ್ನು ರಚಿಸಲಾಗಿದೆ. ಅದರಂತೆ ಎಲ್ಲಾ ಜಿಲ್ಲಾಧಿಕಾರಿಗಳು ಕಾಲಬದ್ಧ ಕ್ರಿಯಾ ಯೋಜನೆ ಸಿದ್ಧಪಡಿಸಿಕೊಂಡು, ಒತ್ತುವರಿ ಆಗಿರುವ ಸರ್ಕಾರಿ ಜಮೀನುಗಳನ್ನು ತೆರವುಗೊಳಿಸಲು ಕ್ರಮವಹಿಸುತ್ತಿದ್ದಾರೆ.<br><br>ರಾಜ್ಯದಲ್ಲಿರುವ ಸರ್ಕಾರಿ ಜಮೀನುಗಳ ಒತ್ತುವರಿ ತೆರವುಗೊಳಿಸಲು ಹಾಗೂ ಸಂರಕ್ಷಿಸಲು ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 15 ಎಲ್‌ಜಿಪಿ 2020; ದಿನಾಂಕ: 29.01.2020ರ ಆದೇಶದ ಮೂಲಕ 07 **ಸದಸ್ಯರುಗಳನ್ನೊಳಗೊಂಡಂತೆ ಸರ್ಕಾರಿ ಜಮೀನುಗಳ ಸಂರಕ್ಷಣಾ ಸಮಿತಿ**ಯನ್ನು ರಚಿಸಲಾಗಿದೆ, ಸದರಿ ಸಮಿತಿಯು ಜಿಲ್ಲೆಗಳ ಸರ್ಕಾರಿ ಜಮೀನುಗಳಿಗೆ ಸಂಬಂಧಿಸಿದಂತೆ ಪ್ರತಿ ವಾರಕ್ಕೂ ಪರಿಶೀಲನಾ ಸಭೆಯನ್ನು ನಡೆಸುತ್ತಿದ್ದು, ಭೂ ಕಬಳಿಕೆ ತಡೆಯುವ ನಿಟ್ಟಿನಲ್ಲಿ ಅಗತ್ಯ ನಿರ್ದೇಶನಗಳನ್ನು ಸರ್ಕಾರಕ್ಕೆ ಕಾಲಕಾಲಕ್ಕೆ ನೀಡಲಾಗುತ್ತಿದೆ.<br>ಉಳಿದಂತೆ ಬಾಕಿ ಇರುವ ಒತ್ತುವರಿ ಜಮೀನುಗಳನ್ನು ಅಳತೆ ಕಾರ್ಯವನು ಕೈಗೊಳ್ಳಲಾಗುತ್ತಿದ್ದು ಹಂತ ಹಂತವಾಗಿ ಒತ್ತುವರಿ ತೆರವುಗೊಳಿಸಲು ಕ್ರಮವಹಿಸಲಾಗುತ್ತಿದೆ. |
| ಉ) | ಬೆಂಗಳೂರು ದಕ್ಷಿಣ ತಾಲ್ಲೂಕು ಕೆಂಗೇರಿ ಹೋಬಳಿ ಪಂತರಪಾಳ್ಯ ಗ್ರಾಮದ ಸ.ನಂ.47ರಲ್ಲಿ ಎಷ್ಟು ಎಕರೆಯನ್ನು ತೆರವುಗೊಳಿಸಲಾಗಿದೆ; ಈ ಪ್ರದೇಶದಲ್ಲಿ ಕೆಲವರು ಹಣ ಪಡೆದು ಅನುಪಯುಕ್ತ ಸಾಮಾಗ್ರಿ/ಕಸವನ್ನು ಅಕ್ರಮವಾಗಿ ದಾಸ್ತಾನು ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಸಂಬಂಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರವನ್ನು ನೀಡುವುದು) | ಬೆಂಗಳೂರು ದಕ್ಷಿಣ ತಾಲ್ಲೂಕು ಕೆಂಗೇರಿ ಹೋಬಳಿ ಪಂತರಪಾಳ್ಯ ಗ್ರಾಮದ ಸ.ನಂ.47ರಲ್ಲಿನ ಒತ್ತುವರಿ ಕುರಿತಂತೆ ಅಧ್ಯಕ್ಷರು, ಬೆಂಗಳೂರು ದಕ್ಷಿಣ ತಾಲ್ಲೂಕು ಭೂ ನ್ಯಾಯ ಮಂಡಳಿ ಹಾಗೂ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪ ವಿಭಾಗ ರವರು ಪ್ರಕರಣ ಸಂಖ್ಯೆ: ಎಲ್‌ಆರ್‌ಎಫ್ /ಐಎನ್‌ಎ/ಎ/ಸಿಆರ್/02/2016-17, ದಿ:29.06.2016ರ ಆದೇಶದಂತೆ ಒಟ್ಟು 24-32 ಎಕರೆ/ಗುಂಟೆ ಸರ್ಕಾರದ ವಶಕ್ಕೆ ಪಡೆಯಲಾಗಿದೆ.<br><br>ಅಧ್ಯಕ್ಷರು, ಬೆಂಗಳೂರು ದಕ್ಷಿಣ ತಾಲ್ಲೂಕು, ಭೂ ನ್ಯಾಯ ಮಂಡಳಿ ಹಾಗೂ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪ ವಿಭಾಗ ಆದೇಶದ ವಿರುದ್ಧ ಮಾನ್ಯ ಕರ್ನಾಟಕ |

| | | |
|---|---|---|
| | | ಉಚ್ಛ ನ್ಯಾಯಾಲಯದಲ್ಲಿ ರಿಟ್ ಪಿಟಿಷನ್ ಸಂಖ್ಯೆ:37229-37231/2016ರಂತೆ ಪ್ರಕರಣ ದಾಖಲಾಗಿದ್ದು, ಮಾನ್ಯ ನ್ಯಾಯಾಲಯವು ದಿನಾಂಕ: 05.04.2017ರಂದು ನೀಡಿದ ಆದೇಶದಲ್ಲಿ ಭೂ ನ್ಯಾಯಮಂಡಳಿಯು ಪ್ರಕರಣವನ್ನು ಕಾನೂನು ಪ್ರಕಾರ ಹೊಸದಾಗಿ ಪರಿಶೀಲಿಸಿ, ಆದೇಶಿಸುವಂತೆ ಹಾಗೂ ದಿನಾಂಕ:04.07.2016ರಂದು ಪ್ರಕರಣದಲ್ಲಿ ನೀಡಿದ Status-quo ಕಾಪಾಡುವಂತೆ ಆದೇಶ ನೀಡಿರುತ್ತದೆ.<br><br>ಮಾನ್ಯ ಕರ್ನಾಟಕ ಉಚ್ಛ ನ್ಯಾಯಾಲಯದ ಆದೇಶದಂತೆ ಅಧ್ಯಕ್ಷರು, ಬೆಂಗಳೂರು ದಕ್ಷಿಣ ತಾಲ್ಲೂಕು, ಭೂ ನ್ಯಾಯಮಂಡಳಿ ಹಾಗೂ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪ ವಿಭಾಗ ರವರು ಸಂಖ್ಯೆ: ಎಲ್ಆರ್ಎಫ್/ಐಎನ್ ಎ/ಎ/ಸಿಆರ್/02/2016-17ರ ಪ್ರಕರಣದ ವಿಚಾರಣೆಯನ್ನು ಕೈಗೊಂಡು ದಿ:14.09.2021ರಂದು ಆದೇಶಕ್ಕಾಗಿ ಕಾಯ್ದಿರಿಸಲಾಗಿರುತ್ತದೆ.<br><br>ಆದರೆ, ನ್ಯಾಯಾಲಯದ ಆದೇಶವನ್ನು ಉಲ್ಲಂಘಿಸಿ, ಪಂತರಪಾಳ್ಯ ಗ್ರಾಮದ ಸ.ನಂ.47ರಲ್ಲಿ ಶೆಡ್‌ಗಳನ್ನು ನಿರ್ಮಿಸಿ ಕೃಷಿಯೇತರ ಉದ್ದೇಶಕ್ಕೆ ಬಳಸುತ್ತಿದ್ದು, ಅನುಪಯುಕ್ತ ಸಾಮಗ್ರಿ/ಕಸವನ್ನು ಅಕ್ರಮವಾಗಿ ದಾಸ್ತಾನು ಮಾಡುತ್ತಿರುವವರ ವಿರುದ್ಧ ದಿನಾಂಕ: 30.10.2020ರಂದು ಕೆಂಗೇರಿ ಗೇಟ್ ಉಪವಿಭಾಗ, ಬ್ಯಾಟರಾಯನಪುರ ಪೊಲೀಸ್ ಠಾಣೆಯಲ್ಲಿ ಅಪರಾಧ ಸಂ:0214/2020ರಂತೆ ಎಫ್ಐಆರ್ ದಾಖಲಿಸಲಾಗಿರುತ್ತದೆ.<br><br>ಭೂನ್ಯಾಯ ಮಂಡಳಿಯಲ್ಲಿ ಪ್ರಕರಣವು ಇತ್ಯರ್ಥವಾದ ನಂತರ ಪರಿಶೀಲಿಸಿ, ನಿಯಮಾನುಸಾರ ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ: ಆರ್‌ಡಿ 11 ಎಲ್‌ಜಿಕ್ಯೂ 2022

(ಆರ್. ಅಶೋಕ)
ಕಂದಾಯ ಸಚಿವರು